ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 51
2. ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
3. ಉತ್ತರಿಸಬೇಕಾದ ದಿನಾಂಕ : 02.03.2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್‌ನ ಜಿಲ್ಲೆಯಲ್ಲಿ ಐದು ಸಹಕಾರಿ ಸಕ್ಕರೆ ಕಾರ್ಖಾನೆಗಳಿದ್ದು, ಅವುಗಳೆಲ್ಲವೂ ಹಾನಿಗೊಂಡಿದ್ದು ಮತ್ತು ಸಾಲ ಹೊಂದಿದ್ದು, ಇದರಲ್ಲಿ ಅತಿ ಕಡಿಮೆ ಸಾಲ ಮತ್ತು ಹಾನಿಯಿರುವ ಬಿ.ಎಸ್.ಎಸ್.ಕೆ. ಸಹಕಾರ ಸಕ್ಕರೆ ಕಾರ್ಖಾನೆ ಹಳ್ಳಿಖೇಡ ಇದನ್ನು ಮಾತ್ರ ಮುಚ್ಚಲಾಗಿದ್ದು ಇನ್ನುಳಿದ ನಾಲ್ಕು ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಮೂರು ಸಹಕಾರಿ ವಲಯದಲ್ಲಿ ಮತ್ತು ಮೂರು ಖಾಸಗಿ ವಲಯದಲ್ಲಿ ಹೀಗೆ ಒಟ್ಟು ಆರು ಸಕ್ಕರೆ ಕಾರ್ಖಾನೆಗಳಿದ್ದು, ಅವುಗಳ ಹೆಸರು ಈ ಕೆಳಕಂಡಂತಿರುತ್ತದೆ.<br><br>1) ಬೀದರ್ ಸಹಕಾರಿ ಸಕ್ಕರೆ ನಿಯಮಿತ, ಹಳ್ಳಿಖೇಡ್,<br>2) ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭಾಲ್ಕಿ.<br>3) ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಇಮಾಂಪುರ<br>4) ಭವಾನಿ ಶುಗರ್ಸ್ ಲಿ., ಬರೂರು.<br>5) ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗ<br>6) ದಿ ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ., ಮೊಗದಾಳ<br><br>ಈ ಮೇಲ್ಕಂಡ 6 ಕಾರ್ಖಾನೆಗಳ ಪೈಕಿ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ಮತ್ತು ಭವಾನಿ ಶುಗರ್ಸ್ ಲಿ., ಕಾರ್ಖಾನೆಗಳನ್ನು ಹೊರತುಪಡಿಸಿ, ಉಳಿದ ಎಲ್ಲಾ ಸಕ್ಕರೆ ಕಾರ್ಖಾನೆಗಳು 2019-20ನೇ ಸಾಲಿನಲ್ಲಿ ಕಾರ್ಯ ನಿರ್ವಹಿಸುತ್ತಿವೆ. |
| ಆ | ಬೀದರ್‌ನ ಬಿ.ಎಸ್.ಎಸ್.ಕೆ. ಸಕ್ಕರೆ ಕಾರ್ಖಾನೆಯನ್ನು ಈ ಹಂಗಾಮಿನಲ್ಲಿ ಪ್ರಾರಂಭಿಸದಿರುವುದರಿಂದ ರೈತರು ತೊಂದರೆಗೊಳಗಾಗಿದ್ದು, ಈ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವುದು ಯಾವಾಗ; ಪ್ರಾರಂಭಿಸದಿದ್ದಲ್ಲಿ, ಇದಕ್ಕೆ ಸೂಕ್ತವಾದ ಕಾರಣಗಳೇನು? | ಬೀದರ್ ಸಹಕಾರಿ ಸಕ್ಕರೆ ನಿಯಮಿತ, ಹಳ್ಳಿಖೇಡ್, ಈ ಕಾರ್ಖಾನೆಯು ದುಡಿಯುವ ಬಂಡವಾಳದ ತೊಂದರೆ ಮತ್ತು ಆಡಳಿತಾತ್ಮಕ ಅನಾನುಕೂಲಗಳಿಂದಾಗಿ 2019-20ನೇ ಹಂಗಾಮಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ಆರಂಭಿಸಿರುವುದಿಲ್ಲ. ಈ ಕಾರ್ಖಾನೆಯು ದಿನಂಪ್ರತಿ ಕಬ್ಬು ಅರೆಯುವ ಸಾಮರ್ಥ್ಯ 3500 ಟಿ.ಸಿ.ಡಿ.ಗಳಾಗಿರುತ್ತದೆ. ಕಾರ್ಖಾನೆ ಕಳೆದ 3 ಹಂಗಾಮುಗಳಲ್ಲಿ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಿರುವುದಿಲ್ಲ. ವಿವರ ಈ ಕೆಳಕಂಡಂತಿದೆ.<br><br>ವರ್ಷ / ನುರಿಸಿದ ಕಬ್ಬಿನ ಪ್ರಮಾಣ (ಮ.ಟನ್‌ಗಳಲ್ಲಿ) / ಉತ್ಪಾದಿಸಿದ ಸಕ್ಕರೆ (ಮ.ಟನ್‌ಗಳಲ್ಲಿ) / ಇಳುವರಿ %<br>2016-17 / 42129 / 2612 / 7.02<br>2017-18 / 20612 / 755 / 3.66<br>2018-19 / 72909 / 4998 / 6.85<br><br>ಈ ಕಾರ್ಖಾನೆಗೆ ಸರ್ಕಾರವು 2017-18ನೇ ಸಾಲಿನಲ್ಲಿ ರೂ.10.00 ಕೋಟಿಗಳ ಸರ್ಕಾರದ ಖಾತರಿ ನೀಡಿದ್ದು, ಇದರ ಆಧಾರದ ಮೇಲೆ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು ಕಾರ್ಖಾನೆಗೆ ಹಣ ಬಿಡುಗಡೆ ಮಾಡಿರುತ್ತದೆ. ಇದಲ್ಲದೆ, 2018-19ನೇ ಸಾಲಿನ ಹಂಗಾಮು ಪ್ರಾರಂಭಿಸುವ ಸಲುವಾಗಿ ಸರ್ಕಾರವು ಕಾರ್ಖಾನೆಗೆ ರೂ.20.00 ಕೋಟಿಗಳ ದುಡಿಯುವ ಬಂಡವಾಳ ಸಾಲ ಮಂಜೂರು ಮಾಡಿ ಬಿಡುಗಡೆ ಮಾಡಿರುತ್ತದೆ. |

| | | |
|---|---|---|
| | | ಬೀದರ್ ಜಿಲ್ಲೆಯಲ್ಲಿ ಪ್ರಸಕ್ತ ಹಂಗಾಮಿನಲ್ಲಿ ತೀವ್ರತರವಾದ ಬರಗಾಲವಿರುವುದರಿಂದ ಕಬ್ಬಿನ ಬೆಳೆಯು ಕುಂಠಿತವಾಗಿರುತ್ತದೆ. ಬೀದರ್ ಜಿಲ್ಲಾ ಜಂಟಿ ಕೃಷಿ ನಿರ್ದೇಶಕರು ನೀಡಿರುವ ವರದಿಯ ಪ್ರಕಾರ 2019-20ನೇ ಸಾಲಿನಲ್ಲಿ ಜಿಲ್ಲೆಯಲ್ಲಿ 13.56 ಲಕ್ಷ ಮೆ. ಟನ್ ಕಬ್ಬು ಲಭ್ಯತೆ ಇರುವುದಾಗಿ ಅಂದಾಜಿಸಲಾಗಿದೆ. ಜಿಲ್ಲೆಯಲ್ಲಿ ಕಾರ್ಯನಿರತ ನಾಲ್ಕು ಸಕ್ಕರೆ ಕಾರ್ಖಾನೆಗಳ ದಿನಂಪ್ರತಿ ಕಬ್ಬು ಅರೆಯುವ ಸಾಮರ್ಥ್ಯ 13600 ಟಿಸಿಡಿಗಳಾಗಿರುತ್ತದೆ. ಅಂದರೆ, ಒಂದು ಹಂಗಾಮಿನಲ್ಲಿ ಕನಿಷ್ಠ 150 ದಿನಗಳು ಕಾರ್ಯ ನಿರ್ವಹಿಸಿದಲ್ಲಿ ಒಟ್ಟು 20.40 ಲಕ್ಷ ಮೆ. ಟನ್ ಕಬ್ಬು ಅರೆಯುವ ಸಾಮರ್ಥ್ಯ ಹೊಂದಿದ್ದು, ಜಿಲ್ಲೆಯಲ್ಲಿ ಲಭ್ಯವಿರುವ ಪೂರ್ಣ ಪ್ರಮಾಣದ ಕಬ್ಬನ್ನು ಅರೆಯುವ ಸಾಮರ್ಥ್ಯ ಹೊಂದಿರುತ್ತವೆ. ಆದ್ದರಿಂದ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ಮತ್ತು ಭವಾನಿ ಶುಗರ್ಸ್ ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸದಿದ್ದರೂ ಸಹ ನೆರೆಯ ಸಕ್ಕರೆ ಕಾರ್ಖಾನೆಗಳು ರೈತರು ಬೆಳೆದಂತಹ ಪೂರ್ಣ ಪ್ರಮಾಣದ ಕಬ್ಬನ್ನು ನುರಿಸುತ್ತಿವೆ. ಕಾರ್ಖಾನೆಯ ಪುನಶ್ಚೇತನದ ಸಂಬಂಧ ಕಾರ್ಖಾನೆಯ ಆಡಳಿತ ಮಂಡಳಿಯು ಸೂಕ್ತ ನಿರ್ಣಯ ಕೈಗೊಳ್ಳಬೇಕಾಗಿರುತ್ತದೆ.<br><br>ಈ ಕಾರ್ಖಾನೆಯು 2019-20ನೇ ಹಂಗಾಮಿನಲ್ಲಿ ಕಾರ್ಯ ಪ್ರಾರಂಭ ಮಾಡದೇ ಇರುವುದರಿಂದ ಕಾರ್ಖಾನೆಯ ಕಾರ್ಯ ವ್ಯಾಪ್ತಿಯಲ್ಲಿ ಬೆಳೆದಂತಹ ಕಬ್ಬನ್ನು ರೈತರ ಹಿತದೃಷ್ಟಿಯಿಂದ ನೆರೆಯ ಸಕ್ಕರೆ ಕಾರ್ಖಾನೆಗಳಿಗೆ ಹಂಚಿಕೆ ಮಾಡಿ ಸರಬರಾಜು ಮಾಡಲು ಜಿಲ್ಲಾಧಿಕಾರಿಗಳು ಕ್ರಮಕೈಗೊಂಡಿರುತ್ತಾರೆ. |

ಸಂಖ್ಯೆ: ವಾಕ್ಕೆ 38 ಸಸಕಾ 2020

(ಅರಬೈಲ್ ಶಿವರಾಮ ಹೆಬ್ಬಾರ)
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು